## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 377 |
| ಸದಸ್ಯರ ಹೆಸರು | : | ಶ್ರೀ ವಿಜಯ್ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 15–12–2021. |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ ಸಂ: | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಬೀದರ್ ಜಿಲ್ಲೆಯ ಔರಾದ್ ತಾಲೂಕಿನ ಚಿಂತಾಕಿಯಿಂದ ಔರಾದ್ ಪಟ್ಟಣಕ್ಕೆ ಬರುವ ರಸ್ತೆಗಳು ಹಾಗೂ ಬಸವಕಲ್ಯಾಣ ಪಟ್ಟಣದ ಕೆಲವು ರಸ್ತೆಗಳು ಸಂಪೂರ್ಣ ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ, ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಬೀದರ್ ಜಿಲ್ಲೆಯ ಔರಾದ್ ತಾಲೂಕಿನ ಚಿಂತಾಕಿಯಿಂದ ಔರಾದ್ ಪಟ್ಟಣಕ್ಕೆ ಬರುವ ರಸ್ತೆಗಳು ಹಾಗೂ ಬಸವಕಲ್ಯಾಣ ಪಟ್ಟಣದ ಕೆಲವು ರಸ್ತೆಗಳು ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಔರಾದ್ ತಾಲೂಕಿನ ಚಿಂತಾಕಿಯಿಂದ ಔರಾದ್ ಪಟ್ಟಣಕ್ಕೆ ಬರುವ ರಸ್ತೆಯು ಎಂ.ಎಸ್. ಬಾರ್ಡರ್ ಮುರ್ಕಿ–ಹಂದರಕಿ ರಾಜ್ಯ ಹೆದ್ದಾರಿ–122 ರ ಭಾಗವಾಗಿರುತ್ತದೆ. ಅಂದರೆ ಸದರಿ ರಸ್ತೆಯ ಕಿ.ಮೀ. 25.00 ರಲ್ಲಿ ಔರಾದ್ ಪಟ್ಟಣವಿದ್ದು, ಕಿ.ಮೀ.39.00 ರಲ್ಲಿ ಚಿಂತಾಕಿ ಗ್ರಾಮವಿದ್ದು, 14.00 ಕಿ.ಮೀ. ಅಂತರ ಇರುತ್ತದೆ. ಈ ಪೈಕಿ ಕಿ.ಮೀ.25.00 ರಿಂದ 33.40 ವರೆಗಿನ 8.40 ಕಿ.ಮೀ. ಉದ್ದ ರಸ್ತೆಯು 5.50 ಮೀಟರ್ ಅಗಲದ ಕ್ಯಾರೇಜ್ ವಿಡ್ತ್ ಹೊಂದಿದ್ದು, ಸಂಚಾರಕ್ಕೆ ಉತ್ತಮ ಸ್ಥಿತಿಯಲ್ಲಿದೆ. ಇನ್ನುಳಿದ ರಸ್ತೆ ಕಿ.ಮೀ. 33.40 ರಿಂದ 39.00 ವರೆಗಿನ 5.60 ಕಿ.ಮೀ. ಉದ್ದದ ರಸ್ತೆಯು 3.75 ಮೀಟರ್ ಅಗಲದ ಕ್ಯಾರೇಜ್ ವಿಡ್ತ್ ಹೊಂದಿದ್ದು, ಇದನ್ನು 2021–22ನೇ ಸಾಲಿನ ರಾಜ್ಯ ಹೆದ್ದಾರಿಗಳ ನಿರ್ವಹಣೆ ಅನುದಾನದಲ್ಲಿ ದುರಸ್ತಿ ಮಾಡುವುದರೊಂದಿಗೆ ಮೋಟರೇಬಲ್ ಸ್ಥಿತಿಯಲ್ಲಿಡಲಾಗಿದೆ.<br><br>ಬಸವಕಲ್ಯಾಣ ಪಟ್ಟಣದಲ್ಲಿ ರಾಜ್ಯ ಹೆದ್ದಾರಿ–11, 34 ಮತ್ತು 51 ರ ಭಾಗಗಳು ಹಾಯ್ದುಹೋಗುತ್ತಿದ್ದು, 2021–22ನೇ ಸಾಲಿನ ರಾಜ್ಯ ಹೆದ್ದಾರಿಗಳ ನಿರ್ವಹಣೆ ಅನುದಾನದಲ್ಲಿ ದುರಸ್ತಿ ಮಾಡಿ ಸಂಚಾರಕ್ಕೆ ಯೋಗ್ಯವಾಗಿರಿಸಿದೆ. |
| ಆ | ಬೀದರ್ ನಿಂದ ಔರಾದ್‌ಗೆ ಹೋಗುವ ರಸ್ತೆ ಹದಗೆಟ್ಟಿದ್ದು, ರಸ್ತೆ ದುರಸ್ತಿಗೆ ಸರ್ಕಾರ ಅನುದಾನ ಬಿಡುಗಡೆಯಾಗಿದ್ದರೂ ಕಾಮಗಾರಿ ಪೂರ್ಣಗೊಂಡಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ: ತೆಗೆದುಕೊಂಡ ಕ್ರಮವೇನು? | ಬೀದರ್‌ನಿಂದ ಔರಾದವರೆಗಿನ ಈ ರಸ್ತೆ ನಿರ್ವಹಣೆ ಕಾಮಗಾರಿಗೆ ರೂ.77,39,732.00ಗಳು ಮಂಜೂರಾಗಿದ್ದು, ದಿನಾಂಕ:14.09.2021 ರಂದು ಗುತ್ತಿಗೆದಾರರನ್ನು ನೇಮಿಸಿದ್ದು, ಈ ರಸ್ತೆಯ ನಿರ್ವಹಣೆ ಕಾಮಗಾರಿ ಪ್ರಗತಿಯಲ್ಲಿರುತ್ತದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |

ಕಡತ ಸಂಖ್ಯೆ: ಲೋಇ 335 ಸಿಎನ್‌ಹೆಚ್ 2021 (ಇ)

(ಸಿ.ಸಿ.ಪಾಟೀಲ)
ಲೋಕೋಪಯೋಗಿ ಸಚಿವರು